ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೧೬, ೨೦೧೫ (ಆಷಾಢ ೨೫, ಶಕ ವರ್ಷ ೧೯೩೭)<br>Bengaluru, Thursday, July 16, 2015 (Ashadha 25, Shaka Varsha 1937) | ಸಂಚಿಕೆ ೨೯<br>Issue 29 |
|---|---|---|

# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** Institute of Excellence ಎಂದು ಮಾನ್ಯತೆ ಪಡೆದಿರುವ "ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ", ಬೆಂಗಳೂರು ಇಲ್ಲಿ ಶಿಕ್ಷಣ ಪಡೆಯುತ್ತಿರುವ ಪರಿಶಿಷ್ಟ ಜಾತಿಗೆ ಸೇರಿದ ಪ್ರತಿಭಾವಂತ ವಿದ್ಯಾರ್ಥಿನಿ ಪ್ರೀತಿ.ಎಲ್.ಎನ್. ಅವರ ಶುಲ್ಕ ಮರುಪಾವತಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕನಿ/ಇಡಿ–7/ಸಿಆರ್–3/2014–15, ದಿನಾಂಕ: 17–05–2014.

ಮೇಲೆ ಓದಲಾದ ದಿನಾಂಕ: 17–05–2014ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಬೆಂಗಳೂರಿನಲ್ಲಿರುವ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ"ಯ ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ, Institute of Excellence (IIT, IIM, IISc ಗಳಂತೆ) ಎಂದು ಪರಿಗಣಿಸಿರುವ ಹಾಗೂ ಬಾರ್ ಕೌನ್ಸಿಲ್ ಆಫ್ ಇಂಡಿಯಾ ಪ್ರಾಯೋಜಿಸಿರುವ ರಾಜ್ಯದ ಏಕೈಕ ಕಾನೂನು ವಿಶ್ವವಿದ್ಯಾಲಯವಾಗಿದ್ದು, ಈ ವಿಶ್ವವಿದ್ಯಾಲಯಕ್ಕೆ "ಕಾಮನ್ ಲಾ ಅಡ್ಮಿಷನ್ ಟೆಸ್ಟ್" ಎಂಬ ಅಖಿಲ ಭಾರತ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಆಯ್ಕೆಯಾಗಬೇಕಾಗಿರುತ್ತದೆ. ಇಂತಹ ಪರೀಕ್ಷೆ ಮೂಲಕ 2009–10ನೇ ಸಾಲಿನಲ್ಲಿ ರಾಜ್ಯದಿಂದ ಆಯ್ಕೆಯಾದ ಏಕೈಕ ವಿದ್ಯಾರ್ಥಿನಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಕೋಣಾಜೆ ಗ್ರಾಮಕ್ಕೆ ಸೇರಿದ ಪ್ರೀತಿ.ಎಲ್.ಎನ್. ಇವರು ಬಿ.ಎ. ಎಲ್.ಎಲ್.ಬಿ (ಆನರ್ಸ್) ಪದವಿಯ ಅಂತಿಮ (5ನೇ) ವರ್ಷದಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಇವರು ಎಸ್.ಎಸ್.ಎಲ್.ಸಿ.ಯಲ್ಲಿ ಶೇ. 92.48 ಹಾಗೂ ಪಿ.ಯು.ಸಿಯಲ್ಲಿ ಶೇ.86.33 ಅಂಕಗಳನ್ನು ಗಳಿಸಿರುತ್ತಾರೆ. ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಭಾರತ ಸರ್ಕಾರದ ಮಾರ್ಗಸೂಚಿಗಳಂತೆ ಪೋಷಕರ ವಾರ್ಷಿಕ ಆದಾಯದ ಮಿತಿಯೊಳಗೆ ಇರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನವನ್ನು (ಶುಲ್ಕಗಳನ್ನು ಒಳಗೊಂಡು) ಮಂಜೂರು ಮಾಡಲಾಗುತ್ತಿದ್ದೆ. ವೃತ್ತಿಪರ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ, ನಿಗಧಿತ ವಾರ್ಷಿಕ ಆದಾಯದ ಮಿತಿ ಮೀರಿದ ಪೋಷಕರ ವಿದ್ಯಾರ್ಥಿಗಳಿಗೆ, ಆಯಾ ಶೈಕ್ಷಣಿಕ ಸಂಸ್ಥೆಗಳ ಕೆಲವು ಸಕ್ಷಮ ಇಲಾಖೆಗಳು ಶುಲ್ಕಗಳನ್ನು ಮರುಪಾವತಿ ಮಾಡುತ್ತಿವೆ (ಉದಾ: ತಾಂತ್ರಿಕ ನಿರ್ದೇಶನಾಲಯವು ಡಿಪ್ಲೋಮಾ ಮತ್ತು ಬಿ.ಇ. ಬಿ.ಟೆಕ್‌ಗೆ ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯವು, ಎಂ.ಬಿ.ಬಿ.ಎಸ್., ಬಿ.ಎ.ಎಂ.ಎಸ್ ಹಾಗೂ ಎಂ.ಡಿ. ಇತರೆ ವೈದ್ಯಕೀಯ ಕೋರ್ಸ್‌ಗಳು). ಆದರೆ, ವೃತ್ತಿಪರ ಕೋರ್ಸ್ ಆಗಿರುವ ಕಾನೂನು ಶಿಕ್ಷಣಕ್ಕೆ ಈ ಸೌಲಭ್ಯ ಇನ್ನು ವಿಸ್ತರಣೆಗೊಂಡಿರುವುದಿಲ್ಲ. ಆದರೆ, ಪ್ರಸ್ತುತ ಮೇಲೆ ತಿಳಿಸಲಾದ ವಿದ್ಯಾರ್ಥಿನಿಯ ಆದಾಯವು ಭಾರತ ಸರ್ಕಾರ ನಿಗಧಿಪಡಿಸಿದ ಈ ಆದಾಯ ಮಿತಿಗಿಂತ ಹೆಚ್ಚಿರುವುದರಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಾತಿಗೆ ಅರ್ಹರಿರುವುದಿಲ್ಲ. ಅಲ್ಲದೆ ಮೇಲಿನ ಸಂಸ್ಥೆಯಲ್ಲಿ ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಪಡೆಯದಿರುವ ಪರಿಶಿಷ್ಟ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಸೌಲಭ್ಯವೂ ಸಹ ಇರುವುದಿಲ್ಲ. ಭಾರತ ಸರ್ಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಮಂತ್ರಾಲಯವು ಜೂನ್ 2007 ರಿಂದ ಜಾರಿಗೆ ಬರುವಂತೆ "Central Sector Scholarship Scheme of Top Class Education for SC Students " ಕಾರ್ಯಕ್ರಮವನ್ನು ಜಾರಿಗೊಳಿಸುತ್ತಿದೆ. ಸದರಿ ಕಾರ್ಯಕ್ರಮದಡಿ ಮೇಲೆ ತಿಳಿಸಲಾದ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ, ಬೆಂಗಳೂರು ಈ ಸಂಸ್ಥೆಯು, ಗುರುತಿಸಲಾದ ಸಂಸ್ಥೆಗಳ ಪಟ್ಟಿಯಲ್ಲಿನ ಕ್ರಮ ಸಂಖ್ಯೆ.111ರಲ್ಲಿದ್ದು, ವಾರ್ಷಿಕ ಆದಾಯ ಮಿತಿ ರೂ.4.50 ಲಕ್ಷಗಳಿಗೆ ನಿಗಧಿಗೊಳಿಸಲಾಗಿದೆ. ಈ ಆದಾಯ ಮಿತಿಯೊಳಗಿರುವ 05 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಮಾತ್ರ ವಿದ್ಯಾರ್ಥಿ ವೇತನ ಪಡೆಯುವುದಕ್ಕೆ ಈ ಯೋಜನೆಯಲ್ಲಿ ಅರ್ಹತೆ ಪಡೆದಿರುತ್ತಾರೆ. ಆದರೆ, ಈ ವಿದ್ಯಾರ್ಥಿನಿಯ ಪೋಷಕರ ಆದಾಯ ನಿಗಧಿತ ಮಿತಿಯೊಳಗಿದ್ದರೂ ಸಹ, ಅಖಿಲ ಭಾರತ ಮಟ್ಟದಲ್ಲಿ ಮೊದಲ 05 ವಿದ್ಯಾರ್ಥಿಗಳ ಪಟ್ಟಿಯಲ್ಲಿ ಇಲ್ಲದಿರುವುದರಿಂದ ವಿದ್ಯಾರ್ಥಿ ವೇತನ ಮಂಜೂರಾಗಿರುವುದಿಲ್ಲ. ಆದರೆ ಈ ವಿದ್ಯಾರ್ಥಿಯು 2009–10ನೇ ಸಾಲಿನಲ್ಲಿ ರಾಜ್ಯದಿಂದ ಈ ಸಂಸ್ಥೆಗೆ ಆಯ್ಕೆಯಾದ ಪರಿಶಿಷ್ಟ ಜಾತಿಗೆ ಸೇರಿದ ಏಕೈಕ

ವಿದ್ಯಾರ್ಥಿನಿಯಾಗಿರುವುದರಿಂದ ಸದರಿ ವಿದ್ಯಾರ್ಥಿನಿಯು ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ, ಬೆಂಗಳೂರು ಇಲ್ಲಿಗೆ ಪಾವತಿಸಿರುವ ಎಲ್ಲಾ ಶುಲ್ಕಗಳು ಅಂದರೆ ಒಟ್ಟು ರೂ. 7,90,220/– (ಏಳು ಲಕ್ಷದ ತೊಂಭತ್ತು ಸಾವಿರದ ಇನ್ನೂರ ಇಪ್ಪತ್ತು ರೂಪಾಯಿಗಳು ಮಾತ್ರ) ಮರುಪಾವತಿಸಲು ಅಗತ್ಯ ದಾಖಲಾತಿಗಳೊಂದಿಗೆ ಮನವಿ ಸಲ್ಲಿಸಿದ್ದಾರೆ. ಆದ್ದರಿಂದ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ವಿದ್ಯಾರ್ಥಿನಿಯು 2009–10 ರಿಂದ 2013–14ನೇ ಸಾಲಿನವರೆಗೆ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ ಬೆಂಗಳೂರು ಇವರಿಗೆ ಪಾವತಿಸಿದ ಶುಲ್ಕವನ್ನು ಮರುಪಾವತಿಸಲು ವಿಶೇಷ ಪ್ರಕರಣವೆಂದು ಪರಿಗಣಿಸಿ ಸೂಕ್ತ ಆದೇಶ ಹೊರಡಿಸುವಂತೆ ಸಂಬಂಧಪಟ್ಟ ದಾಖಲೆಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಪರಿಶಿಷ್ಟ ಜಾತಿಗೆ ಸೇರಿರುವ ಪ್ರತಿಭಾನ್ವಿತ ವಿದ್ಯಾರ್ಥಿನಿ ಕುಮಾರಿ ಪ್ರೀತಿ ಎಲ್.ಎನ್ 2009–10 ರಿಂದ 2013–14ನೇ ಸಾಲಿನವರೆಗೆ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಇವರಿಗೆ ಪಾವತಿಸಿರುವ ಶುಲ್ಕವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಮರುಪಾವತಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 140 ಪಕವಿ 2014, ಬೆಂಗಳೂರು ದಿನಾಂಕ: 19–05–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿಗೆ ಸೇರಿರುವ ಪ್ರತಿಭಾನ್ವಿತ ವಿದ್ಯಾರ್ಥಿನಿ ಕುಮಾರಿ ಪ್ರೀತಿ ಎಲ್.ಎನ್ ಇವರು 2009–10 ರಿಂದ 2013–14ನೇ ಸಾಲಿನವರೆಗೆ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಇವರಿಗೆ ಪಾವತಿಸಿರುವ ಶುಲ್ಕದ ಒಟ್ಟು ಮೊತ್ತ ರೂ.7,90,220/– (ಏಳು ಲಕ್ಷ ತೊಂಭತ್ತು ಸಾವಿರದ ಇನ್ನೂರ ಇಪ್ಪತ್ತು ರೂಪಾಯಿಗಳು ಮಾತ್ರ) ಗಳನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಮರುಪಾವತಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 484 ವೆಚ್ಚ–3–/2014, ದಿನಾಂಕ: 28–06–2014ರಲ್ಲಿ ನೀಡಿರುವ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 302**
**SC - 25**

**ಗಿರಿಜಮ್ಮ.**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಮಾಜ ಕಲ್ಯಾಣ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪೌರಾಡಳಿತ ಸೇವೆಯ ಕಂದಾಯಾದಿಕಾರಿ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ನಅಇ 91 ಇಎಂಸಿ 2014 ದಿನಾಂಕ:10–10–2014.
2) ಶ್ರೀ ಗುಂಡಪ್ಪ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿ ಇವರುಗಳ ಮನವಿ ದಿನಾಂಕ: 16/17–10–2014.
3) ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: 1374/ಡಿಎಂಎ11/ಕೆಎಂಎಎಸ್:2014 ದಿನಾಂಕ:22–11–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದನ್ವಯ ಪೌರಾಡಳಿತ ಸೇವೆಯ ವಿವಿಧ ವೃಂದದ 15 ಜನ ನೌಕರರುಗಳನ್ನು ಅವರ ಸೇವಾ ಜೇಷ್ಠತೆಯನ್ನು ಪರಿಗಣಿಸಿ, ಮುಖ್ಯಾದಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಆ ಸಂದರ್ಭದಲ್ಲಿ ಕಂದಾಯಾಧಿಕಾರಿಗಳ ವೃಂದದಲ್ಲಿನ ನೌಕರರುಗಳಾದ ಶ್ರೀ ಗುಂಡಪ್ಪ, ಕಂದಾಯಾಧಿಕಾರಿ, ಪುರಸಭೆ ಮಾನ್ವಿ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿ, ನಗರಸಭೆ ಗಂಗಾವತಿ ಇವರುಗಳು ಹೈದ್ರಾಬಾದ್–ಕರ್ನಾಟಕ ಪ್ರದೇಶದ ವಿಶೇಷ ವೃಂದದಲ್ಲಿ ಮುಂದುವರೆಯಲು ತಮ್ಮ ಅಭಿಪ್ರಾಯ ಸೂಚಿಸಿದ್ದರು. ಆ ಹಿನ್ನಲೆಯಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ವಿಶೇಷ ವೃಂದಕ್ಕೆ ಕಂದಾಯಾಧಿಕಾರಿಗಳಿಂದ ವಿಲೀನ ಮೂಲಕ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಭರ್ತಿ ಮಾಡಲು ನಿಗಧಿಪಡಿಸಲಾಗಿದ್ದ ಎರಡು ಹುದ್ದೆಗಳನ್ನು ಇವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿದ್ದ ಶ್ರೀ ಶಂಕರಪ್ಪ ಮತ್ತು ಶ್ರೀ ಬಿ.ಬಾಬು ಇವರನ್ನು ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಶ್ರೀ ಗುಂಡಪ್ಪ ಮತ್ತು ಶ್ರೀ ಮೌಲಾಸಾಬ್ ಇವರುಗಳನ್ನು ವಿಲೀನ ಪ್ರಕ್ರಿಯೆಯಿಂದ ಕೈಬಿಡಲಾಗಿತ್ತು.

ಶ್ರೀ ಗುಂಡಪ್ಪ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿಗಳು (ಪೌರ ಸೇವೆ) ಇವರುಗಳು ಹೈದ್ರಾಬಾದ್ ಕರ್ನಾಟಕ ಪ್ರದೇಶದ ವಿಶೇಷ ವೃಂದದ ಜೇಷ್ಠತಾ ಪಟ್ಟಿಯಲ್ಲಿ ತಾವು ಸೇರ್ಪಡೆಗೊಳ್ಳಲು ಸಲ್ಲಿಸಿದ ತಮ್ಮ ಅಭಿಮತದ ಪ್ರಮಾಣ ಪತ್ರವನ್ನು ಹಿಂದಕ್ಕೆ ಪಡೆದಿರುವುದಾಗಿ, ಇದರಿಂದ ತಮ್ಮಗಳ ಜೇಷ್ಠತೆಯನ್ನು ರಾಜ್ಯ ವೃಂದದಲ್ಲೇ ಪರಿಗಣಿಸಿ, ತಮ್ಮ ಸೇವೆಯನ್ನು ಕರ್ನಾಟಕ ಪೌರಾಡಳಿತ ಸೇವೆಯ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ಸರ್ಕಾರಕ್ಕೆ ಮತ್ತು ಪೌರಾಡಳಿತ ನಿರ್ದೇಶನಾಲಯಕ್ಕೆ ಮನವಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಪೌರ ಸೇವೆಯ ಕಂದಾಯಾಧಿಕಾರಿಗಳಾದ ಶ್ರೀ ಗುಂಡಪ್ಪ ಮತ್ತು ಶ್ರೀ ಮೌಲಾಸಾಬ್ ಇವರುಗಳು ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ನಿರ್ವಹಿಸಲಾಗುವ ವಿಶೇಷ ವೃಂದಕ್ಕೆ ಸೇರ್ಪಡೆಗೊಳ್ಳಲು ಈ ಹಿಂದೆ ಸಲ್ಲಿಸಿದ ತಮ್ಮ ಅಭಿಮತದ ಪ್ರಮಾಣ ಪತ್ರವನ್ನು ಹಿಂದಕ್ಕೆ ಪಡೆದಿರುವುದಾಗಿ, ಇದರಿಂದ ಇವರುಗಳ ಜೇಷ್ಠತೆಯನ್ನು ರಾಜ್ಯ ವೃಂದದಲ್ಲೇ ಪರಿಗಣಿಸಿ, ಕರ್ನಾಟಕ ಪೌರಾಡಳಿತ ಸೇವೆಯ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ವಿಶೇಷ ಸ್ಥಳೀಯ ವೃಂದಕ್ಕೆ ಮುಖ್ಯಾಧಿಕಾರಿಗಳ ಶ್ರೇಣಿ–2 ಮತ್ತು ಶ್ರೇಣಿ–1 ವೃಂದದ ಹುದ್ದೆಗಳನ್ನು ನಿಗಧಿಪಡಿಸಲಾಗಿದೆ. ಆದರೆ ಆಯಾಯ ವೃಂದದ ಸ್ಥಳೀಯ ಜೇಷ್ಠತಾ ಪಟ್ಟಿಯನ್ನು (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ) ಪ್ರಕಟಿಸಿಲ್ಲವಾದ್ದರಿಂದ, ಶ್ರೀ ಮೌಲಾಸಾಬ್ ಮತ್ತು ಶ್ರೀ ಗುಂಡಪ್ಪ ಕಂದಾಯಾಧಿಕಾರಿಗಳು ಸೇವಾ ಜೇಷ್ಠತೆಯ ರಾಜ್ಯ ವೃಂದದಲ್ಲಿಯೇ ಮುಂದುವರೆದಿರುತ್ತಾರೆ. ಸದರಿ ಅಧಿಕಾರಿಗಳು ಈ ಹಿಂದೆ ಹೈ–ಕ ಪ್ರದೇಶದ ಸ್ಥಳೀಯ ವೃಂದದ ಮೀಸಲಾತಿ ಪಡೆಯಲು ಸಂಬಂಧಿಸಿದಂತೆ ನೀಡಿರುವ ಅಭಿಮತದ ಪ್ರಮಾಣ ಪತ್ರ ಅನುಬಂಧ ಎ ಮತ್ತು ಸಿ ಗಳನ್ನು ಹಿಂಪಡೆಯಲು ಸಲ್ಲಿಸಿರುವ ಮನವಿಗಳನ್ನು ಪರಿಗಣಿಸಿ, ಇವರಿಗೆ ಕೆಎಂಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳ್ಳಲು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಶಿಫಾರಸ್ಸು ಮಾಡಿರುತ್ತಾರೆ.

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಕಂದಾಯಾಧಿಕಾರಿ ವೃಂದದಿಂದ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಭರ್ತಿ ಮಾಡಲು (ದಿನಾಂಕ: 05–06–2014ಕ್ಕೆ ಅನ್ವಯವಾಗುವಂತೆ) ಒಟ್ಟು 13 ಹುದೆಗಳು ಖಾಲಿ ಇದ್ದು, ಇವುಗಳಲ್ಲಿ 4 ಜನ ನೌಕರರುಗಳನ್ನು ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಸರ್ಕಾರದ ಆದೇಶ ಸಂಖ್ಯೆ:ನಅಇ 91 ಇಎಂಸಿ 2014 ದಿನಾಂಕ: 10–10–2014 ರನ್ವಯ ಆದೇಶಿಸಲಾಗಿದೆ. ಇದರಿಂದ ಇನ್ನು ಮುಖ್ಯಾದಿಕಾರಿ ಶ್ರೇಣಿ–2 ವೃಂದದ 9 ಹುದ್ದೆಗಳು ಕಂದಾಯಾಧಿಕಾರಿಗಳಿಂದ ವಿಲೀನಗೊಳಿಸಲು ಖಾಲಿ ಇರುತ್ತವೆ. ಆದ್ದರಿಂದ ಶ್ರೀ ಗುಂಡಪ್ಪ, ಕಂದಾಯಾಧಿಕಾರಿ, ಪುರಸಭೆ ಮಾನ್ವಿ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿ, ನಗರಸಭೆ ಗಂಗಾವತಿ ಇವರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು ಅವಕಾಶವಿರುತ್ತದೆ.

**ಕಂದಾಯಾಧಿಕಾರಿ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಅರ್ಹತೆ ಹೊಂದಿರುವ ನೌಕರರ ವಿವರ**

| ಕ್ರ ಸಂ. | ನೌಕರರ ಹೆಸರು | ಕಂದಾಯಾಧಿಕಾರಿ ಹುದ್ದೆಗೆ ಬಂದ ದಿನಾಂಕ | ದಿನಾಂಕ: 1–1–2013ಕ್ಕೆ ಇರುವಂತೆ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|---|
| 1 | ಶ್ರೀ ಗುಂಡಪ್ಪ | 01–01–2005 | 98 |
| 2 | ಶ್ರೀ ಮೌಲಾಸಾಬ | 01–01–2005 | 110 |

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಪೌರ ಸೇವೆಯ ಕಂದಾಯಾಧಿಕಾರಿ ವೃಂದದ ನೌಕರರುಗಳಾದ ಶ್ರೀ ಗುಂಡಪ್ಪ, ಕಂದಾಯಾಧಿಕಾರಿ, ಪುರಸಭೆ, ಮಾನ್ವಿ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿ, ನಗರಸಭೆ ಗಂಗಾವತಿ ಇವರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳಿಗೆ ವಿಲೀನಗೊಳಿಸಲು ದಿನಾಂಕ: 05–06–2014ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಇವರ ಹೆಸರುಗಳು ಶಿಫಾರಸ್ಸು ಮಾಡಿರುವುದನ್ನು ಪರಿಗಣಿಸಿ, ಅವರುಗಳ ಸೇವಾ ಮಾಹಿತಿಗಳು/ಅಗತ್ಯ ದಾಖಲೆಗಳು, ನೌಕರರುಗಳ ಸೇವಾ ವಿವರಗಳನ್ನು ಪರಿಶೀಲಿಸಿ ಸದರಿಯವರುಗಳನ್ನು ದಿನಾಂಕ: 10–10–2014ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕೆ.ಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 91 ಇಎಂಸಿ 2014, ಬೆಂಗಳೂರು, ದಿನಾಂಕ: 16–05–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 365(1)(2)(ಎ) ಪ್ರಕಾರ ಪೌರ ಸೇವೆಯ ಶ್ರೀ ಗುಂಡಪ್ಪ, ಕಂದಾಯಾಧಿಕಾರಿ, ಪುರಸಭೆ ಮಾನ್ವಿ ಮತ್ತು ಶ್ರೀ ಮೌಲಾಸಾಬ್, ಕಂದಾಯಾಧಿಕಾರಿ, ನಗರಸಭೆ ಗಂಗಾವತಿ ಇವರುಗಳ ಸೇವಾ ಜೇಷ್ಠತೆಯನ್ನು ಪರಿಗಣಿಸಿ, ದಿನಾಂಕ: 10–10–2014ರಿಂದ ಪೂರ್ವಾನ್ವಯವಾಗಿ (ಸರ್ಕಾರದ ಆದೇಶ ಸಂಖ್ಯೆ:ನಅಇ 91 ಇಎಂಸಿ 2014 ದಿನಾಂಕ: 10–10–2014) ಜಾರಿಗೆ ಬರುವಂತೆ, ಕರ್ನಾಟಕ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಅಧಿಕಾರಿಗಳೆಂದು, ವೇತನ ಶ್ರೇಣಿ ರೂ.17650–32000/– ರಲ್ಲಿ ವೇತನ ಸಂರಕ್ಷಣೆಯೊಂದಿಗೆ, ಹಾಗೂ ಉಳಿದ ಎಲ್ಲಾ ಸೇವಾ ಸೌಲಭ್ಯಗಳನ್ನು ನೀಡಿ, ಕೆ.ಎಂ.ಎ.ಎಸ್. ಅಧಿಕಾರಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಮತ್ತು ಈ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

**ಷರತ್ತುಗಳು :–**

1. ಈ ಮೇಲ್ಕಂಡ ನೌಕರರುಗಳು ಸರ್ಕಾರದ ಆದೇಶ ಸಂಖ್ಯೆ:ನಅಇ 258 ಇಎಂಸಿ 94, ದಿನಾಂಕ: 9–12–1998ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.
2. ಶ್ರೀ ಗುಂಡಪ್ಪ ಇವರ ಸೇವಾ ಜೇಷ್ಠತೆಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 91 ಇಎಂಸಿ 2014 ದಿನಾಂಕ: 10–10–2014 ರನ್ವಯ ಶ್ರೀಮತಿ ವಿ. ರುಕ್ಮಿಣಿ ಮುಖ್ಯಾಧಿಕಾರಿ ಶ್ರೇಣಿ–2 ಇವರ ಜೇಷ್ಠತಾ ಕ್ರಮ ಸಂಖ್ಯೆಗಿಂತ ಮೇಲಿನ ಕ್ರಮ ಸಂಖ್ಯೆಗೆ ನಿಗಧಿಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**P.R. 304**
**SC - 100**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರಿ ಸಂಘ ನಿಯಮಿತ, ಹಳಿಯಾಳ, ಉತ್ತರ ಕನ್ನಡ ಜಿಲ್ಲೆ ಈ ಸಂಘವನ್ನು ಲ್ಯಾಂಪ್ಸ್ ಸೊಸೈಟಿ ಎಂದು ಮಾನ್ಯತೆ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಅಪಜೀ 40 ಎಫ್‌ಡಿಪಿ 2008, ದಿನಾಂಕ: 19-08-2008.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು ಅರಣ್ಯ ಪಡೆ) ಬೆಂಗಳೂರು ಇವರ ಪತ್ರ ಸಂಖ್ಯೆ: ಅಪ್ರಮುಅಸಂ (ಅಸಂನಿ)/(ಎ7/ಎಂಎಫ್‌ಪಿ/ಆರ್.1/2012-13/751, ದಿನಾಂಕ: 13-10-2014 ಮತ್ತು 24-12-2014.

ಪ್ರಸ್ತಾವನೆ :

ಮೇಲೆ (1)ರಲ್ಲಿ ಓದಲಾದ ದಿನಾಂಕ:19-08-2013ರ ಆದೇಶದಲ್ಲಿ ಈ ಮೊದಲು ಹೊರಡಿಸಿದ್ದ ಸರ್ಕಾರದ ಆದೇಶ ಸಂಖ್ಯೆ: ಅಪಜೀ 10 ಎಫ್‌ಡಿಪಿ 2001, ದಿನಾಂಕ: 20-07-2001ರಲ್ಲಿ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಮತ್ತು ಮಾರಾಟ ಮಾಡಲು ಲ್ಯಾಂಪ್ಸ್ (ಬೃಹತ್ ಪ್ರಮಾಣದ ಆದಿವಾಸಿಗಳ ವಿವಿದೋದ್ದೇಶ ಸಹಕಾರ ಸಂಘ) ಸೊಸೈಟಿಗಳಿಗೆ ನೀಡುವ ಕುರಿತು ಹೊರಡಿಸಿರುವ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಮೈಸೂರು, ಚಾಮರಾಜನಗರ, ಕೊಡಗು, ಮಂಗಳೂರು, ಉತ್ತರ ಕನ್ನಡ, ಚಿಕ್ಕಮಗಳೂರು ಜಿಲ್ಲೆಗಳಲ್ಲಿನ 20 ಲ್ಯಾಂಪ್ಸ್ ಸೊಸೈಟಿಗಳಿಗೆ ಸೇವಾಕ್ಷೇತ್ರವನ್ನು ಹಾಲಿ ಇರುವ 21 ತಾಲ್ಲೂಕುಗಳಿಗೆ ಸೀಮಿತಗೊಳಿಸಲಾಗಿದ್ದು, ಪರಿಷ್ಕೃತ ಮಾರ್ಗಸೂಚನೆಗಳನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:13-10-2014 ಹಾಗೂ 24-12-2014ರ ಪತ್ರಗಳಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ) ಬೆಂಗಳೂರು ಇವರು ತಮ್ಮ ಪ್ರಸ್ತಾವನೆಯಲ್ಲಿ **ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರಿ ಸಂಘ ನಿಯಮಿತ, ಹಳಿಯಾಳ, ಉತ್ತರ ಕನ್ನಡ ಜಿಲ್ಲೆ** ರವರು ದಿನಾಂಕ:15-03-2005ರಂದು ಉಪ ನಿಬಂಧಕರು, ಸಹಕಾರಿ ಸಂಘಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರಲ್ಲಿ ನೋಂದಣಿ ಮಾಡಿಸಿದ್ದು, ಸಂಘದ ಕಾರ್ಯವ್ಯಾಪ್ತಿಯ ಬಗ್ಗೆ ಮತ್ತು ಸದರಿ ಸಹಕಾರಿ ಸಂಘದಲ್ಲಿ 1485 ಸದಸ್ಯರು ನೈಜ ಬುಡಕಟ್ಟು ಜನಾಂಗದವರಾಗಿದ್ದಾರೆಂದು ವರದಿ ಮಾಡುವುದರ ಮೂಲಕ **ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರಿ ಸಂಘ ನಿಯಮಿತ, ಹಳಿಯಾಳ,** ಸಂಘವನ್ನು ಲ್ಯಾಂಪ್ಸ್ ಸೊಸೈಟಿ ಎಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು, ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 156 ಎಫ್‌ಡಿಪಿ 2014, ಬೆಂಗಳೂರು, ದಿನಾಂಕ: 27-01-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, **ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರಿ ಸಂಘ ನಿಯಮಿತ, ಹಳಿಯಾಳ, ಉತ್ತರ ಕನ್ನಡ ಜಿಲ್ಲೆ** ಈ ಸಂಘವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದ ವರೆಗೆ ಲ್ಯಾಂಪ್ಸ್ ಸೊಸೈಟಿ ಎಂದು ಸರ್ಕಾರ ಮಾನ್ಯತೆ ನೀಡಿ ಆದೇಶಿದೆ. ಈ ಸಂಘಕ್ಕೆ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ಅರಣ್ಯ ವಿಭಾಗದ ವ್ಯಾಪ್ತಿಯ ಅರಣ್ಯ ಪ್ರದೇಶಗಳಲ್ಲಿನ ಕಿರು ಅರಣ್ಯ ಉತ್ಪನ್ನಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 40 ಎಫ್‌ಡಿಪಿ 2008, ದಿನಾಂಕ: 19-08-2008ರಲ್ಲಿ ವಿವರಿಸಿರುವ ಕಿರು ಅರಣ್ಯ ಉತ್ಪನ್ನಗಳಿಗೆ ಮಾತ್ರ ಸೀಮಿತಗೊಳಿಸಿ ಸಂಗ್ರಹಿಸಿ ಮಾರಾಟ ಮಾಡಲು ಅನುಮತಿ ನೀಡಿದೆ.

ಸದರಿ ಸಂಸ್ಥೆಯು ಸರ್ಕಾರಿ ಆದೇಶ ಸಂಖ್ಯೆ: ಅಪಜೀ 40 ಎಫ್‌ಡಿಪಿ 2008, ದಿನಾಂಕ: 19-08-2013ರಲ್ಲಿ ನಮೂದಿಸಿರುವ ಇತರೆ ಎಲ್ಲಾ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**P.R. 308**

## URBAN DEVELOPMENT SECRETARIAT

**Sub :** Providing water supply and sewerage system network to 110 villages of BBMP.

**Read :** Letter No.BWSSB/CH/CHO/02/2014-15, DATED: 14.01.2015 received from Chairman, BWSSB

**PREAMBLE :**

Chairman, Bengaluru Water Supply and Sewerage Board in his letter dated: 14.01.2015 read above has sent a proposal to Government for obtaining technical clearance of Ministry of Urban Development Government of India and for posing external financial assistance from Japan International Co-operation Agency (JICA) for the revised Detailed Project Report (DPR) for providing water supply and sewerage system network to 110 villages of Bruhat Bengaluru Mahanagara Palike (BBMP) area.

The Bengaluru Water Supply and Sewerage Board has the responsibility for providing water supply and underground drainage system to Bengaluru City including extended areas of 110 villages, which are included for BBMP area. Accordingly a DPR for entire area of 225 Sq K.Ms for providing water supply and sewerage system has been prepared.

For preparing DPR for an area of 225 Sq K.Ms of 110 villages, it is divided in to at 5 Zones as detailed below:

| | | | |
|---|---|---|---|
| 1 | Byataranapura Zone | 55 sq k.ms | 26 villages |
| 2 | Mahadevapura Zone | 51.03 sq k.ms | 23 villages |
| 3 | Bommanahalli Zone | 64.26 sq k.ms | 33 villages |
| 4 | Rajarajeshwari nagar Zone | 31.42 sq k.ms | 17 villages |
| 5 | Dasarahalli Zone | 23.51 sq k.ms | 11 villages |
| **Total** | | **225 sq k.ms** | **110 villages** |

The DPR which was prepared earlier for providing water supply, sewerage and Road Restoration Component, it was approved by the Government vide G.O. No. UDD 269 MNI 2010, Dated: 02.12.2010 amounting to Rs. 2,379.00 crores with the following financial/funding structure:

| | | |
|---|---|---|
| 1 | GOK | Rs. 178 crore (7.5%) |
| 2 | BCC<br>(Benificiary Capital Contribution) | Rs. 178 crore (7.5%) |
| 3 | Loans | Rs. 2023 crore (85%)<br>From JICA through GOK |

As per above Government Order DPR was forwarded by BWSSB to Ministry of Urban Development, Central Public Health Environmental Engineering Organisation (CPHEEO) for technical clearance of Government of India for posing the same for external financial assistance from JICA.

Ministry of Urban Development, Central Public Health Environmental Engineering Organisation (CPHEEO) in its letter No. Q-14014/3/2011- CPHEEO, dated: 09.08.2011 has provided its comments on Detailed Project Report and asked to intimate the source and availability of water for the project and details of population projection adopted for 110 villages. In response to this revised Detailed Project Report is prepared with the following aspects:

**Details of Growth rates for the design year 2019, 2034 & 2049.**

| Sl. No. | Zone | Population as per 2011 Census | Projected Population | | | |
|---|---|---|---|---|---|---|
| | | | 2014 | 2019 | 2034 | 2049 |
| 1 | Byatrayanpura<br>(26 Villages) | 243210 | 276588 | 342705 | 593891 | 941098 |
| 2 | Mahadevpura<br>(23 Villages) | 225491 | 256437 | 317737 | 550622 | 872533 |
| 3 | Bommanahalli<br>(33 Villages) | 285174 | 324311 | 401836 | 696361 | 1103476 |
| 4 | RRNagar<br>(17 Villages) | 165763 | 188512 | 233574 | 404772 | 641415 |
| 5 | Dasarahalli<br>(11 Villages) | 193656 | 220233 | 272878 | 472884 | 749347 |
| **TOTAL (110 Villages)** | | **1113294** | **1266081** | **1568730** | **2718530** | **4307869** |

Based on the above population projections, and allocation of additional water, revision of DPR has been completed. The details of the project cost of all 5 zones based on the 2014-15 SR (Schedule of Rates) of BWSSB, KUWS & DB, PWD, Ind STT are indicated below:

| Sl. No. | Name of Zone | Based on 2001 Census Population & Estimates based on 2009 -2010 SR | | | As per 2011 Census Population & Estimates based on 2014 -2015 SR | | |
|---|---|---|---|---|---|---|---|
| | | **Population for 2041** | **Pipe Length (Km)** | **Estimated Cost (Crore)** | **Population for 2049** | **Pipe Length (Km)** | **Estimated Cost (Crore)** |
| 1 | Byatrayanpura (26 Villages) | 324760 | 603 | 587.24 | 941098 | 724 | 1111.30 |
| 2 | Mahadevpura (23 Villages) | 371527 | 333 | 395.61 | 872533 | 407 | 894.69 |
| 3 | Bommanahalli (33 Villages) | 449468 | 455 | 689.98 | 1103476 | 809 | 1556.10 |
| 4 | RRNagar (17 Villages) | 223096 | 246 | 366.32 | 641415 | 336 | 510.56 |
| 5 | Dasarahalli (11 Villages) | 263074 | 346 | 337.20 | 749347 | 541 | 945.71 |
| **TOTAL** | | **16,31,925** | **1983** | **2379.00** | **43,07,869** | **2817** | **5018.38** |

The project cost of 5 zones has been estimated at Rs, 5018.38 Crore based on the 2014-15 SR (Schedule of Rates) of BWSSB, KUWS & DB, PWD & Ind STT.

Accordingly the Revised funding pattern will be as detailed below:

| | | |
|---|---|---|
| 1 | GOK | Rs. 376.37 Crore (7.5%) |
| 2 | BCC | Rs. 376.37 Crore (7.5%) Beneficiary Capital Contribution |
| 3 | LOAN | Rs. 4265.62 Crore (85%) from JICA through GOI |

The Proposal has been examined by the Government and hence the following order:

**GOVERNMENT ORDER No. UDD 11 MNI 2015, BENGALURU, DATED: 23-05-2015.**

In the circumstances explained in the preamble, Government are pleased to accord the administrative approval for the revised Detailed Project Report of BWSSB costing Rs. 5018.36 Crores for providing water supply and sewerage system to the 5 Zones covering an area of 225 Sq K.Ms in 110 villages of the Bhruhat Bengaluru Mahanagara Palike area and to obtain the technical clearance from Government of India to pose it for external financial assistance from Japan International Co-operation Agency (JICA), with following funding pattern:

(a) By raising loan of Rs. 4265.69 for JICA through Government of India.

(b) Government of Karnataka to provide complementary support of Rs. 367.37 Crore of project cost of BWSSB from the planned budget of Urban Development Department.

(c) BWSSB contribution of Rs. 367.37 Crore to be met from its own resources.

(d) BWSSB to collect Beneficiary Contribution Charges (BCC) from the beneficiaries of 110 villages on the same lines as in Grater Bengaluru Water and Sanitation Project (GBWASP) and to allow BWSSB to utilise the amount for repaying JICA loan to that extent.

This order issues with the concurrence of the Planning Department vide No. PD 19 IMM 2015, dated: 05.05.2015 and Finance Department vide No. FD 07 PMU 2015, dated: 22.04.2015 and approved by Cabinet vide subject No. C-248/2015, dated: 07.05.2015.

By Order and in the name of the Governor of Karnataka

**RAMACHANDRA**

Deputy Secretary to Government,

Urban Development Department.

**P.R. 314**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನದ ರಾಜ್ಯ ಮಟ್ಟದ ಸಮಿತಿಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಸಚಿವರನ್ನು ಛೇರ್ಮನ್‌ರನ್ನಾಗಿ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: 245 ಬಿಸಿಎ 2012 ದಿನಾಂಕ: 10/12/2012.
2) ಪ್ರತಿಷ್ಠಾನದ ಮಹಾ ಪೋಷಕರಾದ ಸನ್ಮಾನ್ಯ ಶ್ರೀ ಸಿದ್ದರಾಮಯ್ಯ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:14/01/2015ರಂದು ನಡೆದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನದ ಸಭೆಯ ನಡವಳಿಗಳು.
3) ಸದಸ್ಯ ಕಾರ್ಯದರ್ಶಿಗಳು, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನ ರವರ ಟಿಪ್ಪಣಿ ಸಂಖ್ಯೆ: ಸಿಆರ್–56/2014–15 ದಿನಾಂಕ:08/05/2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನವನ್ನು ನೋಂದಾಯಿತ ಟ್ರಸ್ಟ್ ಮೂಲಕ ಸ್ಥಾಪಿಸಲು ಅನುಮತಿ ನೀಡಿ ಸನ್ಮಾನ್ಯ ಮುಖ್ಯಮಂತ್ರಿಗಳು ಈ ಟ್ರಸ್ಟ್‌ನ ಮುಖ್ಯಪೋಷಕರಾಗಿರುತ್ತಾರೆ ಹಾಗೂ ಟ್ರಸ್ಟ್‌ನ ಚೇರ್ಮನ್, ಕೋ–ಚೇರ್ಮನ್ ಹಾಗೂ ಇತರೆ ಸದಸ್ರಯ ವಿವರಗಳು ಈ ಕೆಳಕಂಡಂತೆ ಇರುತ್ತವೆ.

| | | |
|---|---|---|
| 1 | ಮಾನ್ಯ ಕಂದಾಯ ಸಚಿವರು, ಕರ್ನಾಟಕ ಸರ್ಕಾರ | ಛೇರ್‌ಮನ್ |
| 2 | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು | ಕೋ–ಛೇರ್‌ಮನ್ |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ,<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 5 | ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 6 | ಆಯುಕ್ತರು,<br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸದಸ್ಯರು |
| 7 | ಮುಖ್ಯ ಇಂಜಿನಿಯರ್ (ಸಂಪರ್ಕ ಮತ್ತು ಕಟ್ಟಡ)<br>ಲೋಕೋಪಯೋಗಿ ಇಲಾಖೆ | ಸದಸ್ಯರು |
| 8 | ಆಯುಕ್ತರು,<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 9 | ನಿರ್ದೇಶಕರು,<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 10 | ಸರ್ಕಾರದಿಂದ ನಾಮ ನಿರ್ದೇಶಿತ ಸದಸ್ಯರು | 4 ಜನ |
| 11 | ವ್ಯವಸ್ಥಾಪಕ ನಿರ್ದೇಶಕರು<br>ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ),. | ಸದಸ್ಯ<br>ಕಾರ್ಯದರ್ಶಿಗಳು |

ಮೇಲೆ (2)ರಲ್ಲಿ ಓದಲಾದ ನಡವಳಿಯಲ್ಲಿ ದಿನಾಂಕ:14/01/2015ರಂದು ನಡದ ಸಭೆಯಲ್ಲಿ ವಿಷಯ ಸಂಖ್ಯೆ:2 ರ i ರಲ್ಲಿ ಕೆಳಕಾಣಿಸಿದಂತೆ ತೀರ್ಮಾನ ಕೈಗೊಳ್ಳಲಾಗಿರುತ್ತದೆ.

> "ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಮತ್ತು ಪ್ರತಿಷ್ಠಾನದ ಕೋ–ಛೇರ್ಮನ್ ರವರು ಈ ಪ್ರತಿಷ್ಠಾನವು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವ್ಯಾಪ್ತಿಯಡಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಲೆಕ್ಕ ಶೀರ್ಷಿಕೆಯಡಿ ಕಾರ್ಯನಿರ್ವಹಿಸುತ್ತಿರುವುದರಿಂದ ಈ ಪ್ರತಿಷ್ಠಾನಕ್ಕೆ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರನ್ನು ಛೇರ್ಮನ್/ಅಧ್ಯಕ್ಷರನ್ನಾಗಿ ಮಾಡಬೇಕೆಂದು ತಿಳಿಸಿದರು. ಈ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಹಿಂವಕಇ 245 ಬಿಸಿಎ 2012, ಬೆಂಗಳೂರು, ದಿನಾಂಕ: 10/12/2012ರ ಆದೇಶದಲ್ಲಿ ರಚಿಸಿರುವ ಪ್ರತಿಷ್ಠಾನದ ನಿರ್ದೇಶಕ ಮಂಡಳಿಯನ್ನು ಮಾರ್ಪಡಿಸಿ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಪ್ರತಿಷ್ಠಾನದ ಛೇರ್ಮನ್‌ರಾಗಿ ಹಾಗೂ ಕಂದಾಯ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಕೋ–ಛೇರ್ಮನ್‌ರನ್ನು ಎಂದು ಆದೇಶ ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಲಾಯಿತು."

ಅದರಂತೆ, ಮೇಲೆ(3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸದಸ್ಯ ಕಾರ್ಯದರ್ಶಿಗಳು, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನ (ರಿ) ರವರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಲೆಕ್ಕ ಶೀರ್ಷಿಕೆಯಡಿ ಕಾರ್ಯನಿರ್ವಹಿಸುತ್ತಿರುವುದರಿಂದ, ಈ ಪ್ರತಿಷ್ಠಾನಕ್ಕೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರನ್ನು ಅಧ್ಯಕ್ಷರನ್ನಾಗಿ ಮಾಡಿ ದಿನಾಂಕ: 10.12.2012ರ ಸರ್ಕಾರದ ಆದೇಶದಲ್ಲಿ ರಚಿಸಿರುವ ಪ್ರತಿಷ್ಠಾನದ ನಿರ್ದೇಶಕ ಮಂಡಳಿಯನ್ನು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮಾರ್ಪಡಿಸಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರನ್ನು ಪ್ರತಿಷ್ಠಾನದ ಛೇರ್ಮನ್‌ರಾಗಿ ಹಾಗೂ ಕಂದಾಯ ಸಚಿವರನ್ನು ಕೋ–ಛೇರ್ಮನ್‌ರಾಗಿ ಮಾರ್ಪಡಿಸಿ, ಆದೇಶ ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವುದನ್ನು ಪರಿಶೀಲಿಸಿ ಪ್ರತಿಷ್ಠಾನದ ನಿರ್ದೇಶಕ ಮಂಡಳಿಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರನ್ನು ಛೇರ್ಮನ್‌ರಾಗಿ ಹಾಗೂ ಕಂದಾಯ ಸಚಿವರನ್ನು ಕೋ–ಛೇರ್ಮನ್‌ರಾಗಿ ಮಾರ್ಪಡಿಸಿ ಸರ್ಕಾರದ ಆದೇಶ ಹೊರಡಿಸಲು ತೀರ್ಮಾನಿಸಿ ಅದರಂತೆ, ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 162 ಬಿಸಿಎ 2015, ಬೆಂಗಳೂರು, ದಿನಾಂಕ: 13–05–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: 245 ಬಿಸಿಎ 2012 ದಿನಾಂಕ: 10/12/2012ರ ಆದೇಶವನ್ನು ಮಾರ್ಪಡಿಸಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರನ್ನು ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನದ ಛೇರ್ಮನ್‌ರಾಗಿ ಹಾಗೂ ಕಂದಾಯ ಸಚಿವರನ್ನು ಕೋ–ಛೇರ್ಮನ್‌ರಾಗಿ ಮಾರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. ಕಲಾವತಿ**

ಸರ್ಕಾರದ ಉಪ ಕಾರ್ಯದರ್ಶಿ,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

P.R. 348

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59